ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 03 ನೇ ಮಾರ್ಚ್, 2020

ಕೈಗಾರಿಕೆಗಳನ್ನು ಸ್ಥಾಪನೆ ಮಾಡಲು ಜಮೀನು ನೀಡಿರುವ ಬಗ್ಗೆ

ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

020 (67) ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಕಳೆದ ಎರಡು ವರ್ಷ ಬೆಂಗಳೂರು ಗ್ರಾಮಾಂತರ ನೆಲಮಂಗಲ ತಾಲ್ಲೂಕು ಮತ್ತು ತುಮಕೂರು ಜಿಲ್ಲೆಯಲ್ಲಿ ಕೈಗಾರಿಕೆಗಳನ್ನು ಸ್ಥಾಪನೆ ಮಾಡಲು ಸರ್ಕಾರದಿಂದ ಯಾವ ಯಾವ ಕಂಪನಿಗಳಿಗೆ/ಕಾರ್ಖಾನೆಗಳಿಗೆ/ಸಂಸ್ಥೆಗಳಿಗೆ ಎಷ್ಟೆಷ್ಟು ಎಕರೆ ಜಮೀನನ್ನು ನೀಡಲಾಗಿದೆ ; (ಕಂಪನಿ ಮಾಲೀಕರು/ಕಾರ್ಖಾನೆ /ಸಂಸ್ಥೆ ಹೆಸರು ವಿಳಾಸದೊಂದಿಗೆ ತಾಲ್ಲೂಕುವಾರು ವಿವರ ನೀಡುವುದು)

(ಆ) ಈ ಕಂಪನಿಗಳಿಗೆ ಕೈಗಾರಿಕೆ ಸ್ಥಾಪಿಸುವ ಉದ್ದೇಶಕ್ಕೆ ರಿಯಾಯಿತಿ ದರದಲ್ಲಿ ಯಾವ ಯಾವ ಸೌಲಭ್ಯಗಳನ್ನು ಸರ್ಕಾರ ಒದಗಿಸಿಕೊಟ್ಟಿದೆ ; (ಸಂಪೂರ್ಣ ಮಾಹಿತಿ ನೀಡುವುದು)

(ಇ) ಕೈಗಾರಿಕೆಗಳನ್ನು ಸ್ಥಾಪಿಸಲು ಸರ್ಕಾರದಿಂದ ನೀಡಿರುವ ಜಮೀನನ್ನು ಸಂಪೂರ್ಣವಾಗಿ ಸದರಿ ಉದ್ದೇಶಕ್ಕಾಗಿ ಬಳಸಿಕೊಳ್ಳಲಾಗಿದೆಯೇ ; (ವಿವರ ನೀಡುವುದು)

(ಈ) ಕೈಗಾರಿಕೆಗಳನ್ನು ಸ್ಥಾಪಿಸಲು ಕೊಟ್ಟಿರುವ ಜಮೀನನ್ನು ಬಳಸಿಕೊಳ್ಳದೆ ಹಾಗೆ ಇರುವ ಸಂಸ್ಥೆಗಳೆಷ್ಟು ; ಅಂತಹ ಸಂಸ್ಥೆಗಳಿಗೆ ಎಷ್ಟು ಎಕರೆ ಜಮೀನನ್ನು ನೀಡಿದೆ ಮತ್ತು ಇತರೆ ರಿಯಾಯಿತಿ ಸೌಲಭ್ಯಗಳನ್ನು ನೀಡಲಾಗಿದೆ ಎಂಬ ಬಗ್ಗೆ ಪೂರ್ಣ ವಿವರ ನೀಡುವುದು ;

(ಉ) ಕಳೆದ 2 ವರ್ಷಗಳಲ್ಲಿ ನೆಲಮಂಗಲ ತಾಲ್ಲೂಕು ಮತ್ತು ತುಮಕೂರು ಜಿಲ್ಲೆಯಲ್ಲಿ ಈಗಾಗಲೇ ಸ್ಥಾಪನೆಗೊಂಡಿರುವ ಕಂಪನಿ/ಕಾರ್ಖಾನೆ/ಸಂಸ್ಥೆಗಳಿಂದ ಎಷ್ಟು ಪ್ರಮಾಣದಲ್ಲಿ ಉದ್ಯೋಗಗಳು ಸೃಷ್ಟಿಯಾಗಿವೆ ಮತ್ತು ಈ ಉದ್ಯೋಗಗಳಲ್ಲಿ ಸ್ಥಳೀಯರಿಗೆ ನೀಡಿರುವ ಉದ್ಯೋಗಿಗಳ ಸಂಖ್ಯೆ ಎಷ್ಟು ಎಂಬುದರ ಬಗ್ಗೆ ಸಂಪೂರ್ಣವಾದ ವಿವರವನ್ನು ಹಾಗೂ ತಾಲ್ಲೂಕುವಾರು ಮಾಹಿತಿಯನ್ನು ನೀಡುವುದು ?